## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 659 (760)

ಮಾನ್ಯ ಸದಸ್ಯರ ಹೆಸರು : ಶ್ರೀ ನಸೀರ್ ಅಹ್ಮದ್ (ವಿಧಾನಸಭೆಯಿಂದ ಚುನಾಯಿತರಾದವರು)

ವಿಷಯ : 2018-19ನೇ ಸಾಲಿನಲ್ಲಿನ ಆಯವ್ಯಯದ ಕಾರ್ಯಕ್ರಮಗಳ ಬಗ್ಗೆ

ಉತ್ತರಿಸುವ ದಿನಾಂಕ : 25-09-2020

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | 2018-19ನೇ ಆಯವ್ಯಯದಲ್ಲಿ ಮಂಡಿಸಿರುವಂತೆ ಪ್ರವಾಸೋದ್ಯಮ ವಲಯದ ಆತಿಥ್ಯ ಕ್ಷೇತ್ರದಲ್ಲಿ ಉದ್ಯೋಗಾವಕಾಶಗಳನ್ನು ಸೃಜಿಸಲು ಕೌಶಲ್ಯಾಭಿವೃದ್ಧಿ, ಪ್ರವಾಸಿ ಮಾರ್ಗದರ್ಶಿ ತರಬೇತಿ ಕಾರ್ಯಕ್ರಮ ಹಾಗೂ ಪ್ರವಾಸಿ ಟ್ಯಾಕ್ಸಿ ಚಾಲಕರಿಗೆ ರಿಫ್ರೆಷರ್ ಕೋರ್ಸ್‌ಗಳ ಮೂಲಕ ತರಬೇತಿ ನೀಡಲು ಉದ್ದೇಶಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಈ ಸೌಲಭ್ಯಗಳನ್ನು ಅನುಷ್ಠಾನಕ್ಕೆ ತರಲಾಗಿದೆಯೇ; | 2018-19ನೇ ಸಾಲಿನಲ್ಲಿ ಬೇಲೂರು, ಹಂಪಿ ಮತ್ತು ವಿಜಯಪುರದಲ್ಲಿ ಪ್ರವಾಸಿ ಮಾರ್ಗದರ್ಶಿಗಳಾಗಿ ಕಾರ್ಯನಿರ್ವಹಿಸಲು ಮುಂದೆ ಬರುವ ನಿರುದ್ಯೋಗಿ ಯುವಕ/ಯುವತಿಯರಿಗೆ ಕೌಶಲ್ಯಾಭಿವೃದ್ಧಿ ಯೋಜನೆಯಡಿ ತರಬೇತಿ ನೀಡುವ ಸಂಬಂಧ ಆಸಕ್ತ ಸಂಸ್ಥೆಗಳಿಂದ Expression of Interest ಆಹ್ವಾನಿಸಲಾಗಿತ್ತು. ಆದರೆ ಯಾವುದೇ ಸಂಸ್ಥೆ ಆಸಕ್ತಿ ವ್ಯಕ್ತಪಡಿಸಿರುವುದಿಲ್ಲ. |
| (ಇ) | ಈ ಸೌಲಭ್ಯ ಇನ್ನೂವರೆಗೂ ಅನುಷ್ಠಾನಕ್ಕೆ ತರದೆ ಇದ್ದಲ್ಲಿ ಯಾವಾಗಿನಿಂದ ಜಾರಿಗೆ ತರಲಾಗುವುದು: (ಸಂಪೂರ್ಣ ವಿವರ ನೀಡುವುದು) | ಕರ್ನಾಟಕ ಪ್ರವಾಸೋದ್ಯಮ ನೀತಿ 2020-25ನ್ನು ಜಾರಿಗೆ ತಂದಿದ್ದು, ಸದರಿ ನೀತಿಯಲ್ಲಿ ಕೌಶಲ್ಯಭಿವೃದ್ಧಿ ಯೋಜನೆಯಡಿ ಪ್ರವಾಸಿ ಕ್ಷೇತ್ರದಲ್ಲಿ ತರಬೇತಿ ಕಾರ್ಯಕ್ರಮ ಹಮ್ಮಿಕೊಳ್ಳುವ ಸಂಸ್ಥೆಗಳನ್ನು ಬಲಪಡಿಸುವುದು ಮತ್ತು ಉನ್ನತೀಕರಿಸಿ ಪ್ರೋತ್ಸಾಹ ನೀಡುವುದಲ್ಲದೇ ಅಂತಹ ಸಂಸ್ಥೆಗಳಲ್ಲಿನ ತರಬೇತಿ ಕಾರ್ಯಕ್ರಮದ ಗುಣಮಟ್ಟವನ್ನು ಉತ್ತಮಪಡಿಸುವಂತಹ ಯೋಜನೆಗಳನ್ನು ಹಮ್ಮಿಕೊಳ್ಳಲು ಉದ್ದೇಶಿಸಲಾಗಿದೆ. ಶೀಘ್ರದಲ್ಲಿಯೇ ಈ ಸಂಬಂಧ ಕಾರ್ಯಾಚರಣೆಯ ಮಾರ್ಗಸೂಚಿಗಳನ್ನು ಹೊರಡಿಸಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕ್ರಮವಹಿಸಲಾಗುವುದು. |

ಸಂಖ್ಯೆ.ಟಿಓಆರ್ 162 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.